



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 68

| | | | | |
|---|---|---|---|---|
| ಸಂಪುಟ: ೦೮ ಸಂಚಿಕೆ: ೧ | ಏಪ್ರಿಲ್೨೦೨೧ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
| Vol. 08 Issue 1 | Apirl 2021 | Pages - 8 | A. Sub. - Rs. 20/- | Editor : Sri. B.R. Ravindranath |




೨೧-೦೨-೨೦೨೧

# ಪ್ರೊ. ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ ಮತ್ತು ಶ್ರೀ ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ ಪ್ರದಾನ ಕಾರ್ಯಕ್ರಮ



ಈ ಎರಡೂ ಪ್ರಶಸ್ತಿಗಳ ಪ್ರದಾನ ಸಮಾರಂಭವು ದಿನಾಂಕ : ೨೧-೨-೨೦೨೧ರಂದು ಡಾ. ಎಲ್. ಹನುಮಂತಯ್ಯನವರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ನಡೆಯಿತು. ಆರಂಭದಲ್ಲಿ ಪ್ರೊ. ಆರ್. ಲಕ್ಷ್ಮೀನಾರಾಯಣರವರು ಎಲ್ಲರಿಗೂ ಹಾರ್ದಿಕ ಸುಸ್ವಾಗತವನ್ನು ಬಯಸಿದರು. ಪ್ರೊ. ಎಲ್.ಎಸ್.ಎಸ್ ರವರು ಮತ್ತು ಪ್ರೊ.ವಿ.ನಾಗರಾಜರಾವ್ ಅವರಿಬ್ಬರೂ ಮೂಲತಃ ಇಂಗ್ಲೀಷ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದವರು. ಜೊತೆಜೊತೆಗೆ ಮಾಧ್ಯಮ ಕ್ಷೇತ್ರದಲ್ಲಿಯೂ ಒಳ್ಳೆಯ ಕೆಲಸ ಮಾಡಿದ್ದಾರೆ ಎಂದು ಅವರಿಬ್ಬರ ಬದುಕು ಮತ್ತು ಸಾಧನೆಗಳ ಪರಿಚಯ ಮಾಡಿಕೊಟ್ಟರು. ಪ್ರೊ. ಓ.ಎಲ್.ನಾಗಭೂಷಣ ಸ್ವಾಮಿ ರಾಜ್ಯದ ಅನೇಕ ಸರಕಾರಿ ಪದವಿ ಕಾಲೇಜುಗಳಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಲೇ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಗಳನ್ನು ಕೊಟ್ಟಿದ್ದಾರೆ. ಅವರ 'ವಿಮರ್ಶೆಯ ಪರಿಭಾಷೆ' ಕೃತಿಯು ಕನ್ನಡ ಸಾಹಿತ್ಯದಲ್ಲಿನ ಅಮೂಲ್ಯ ಕೃತಿಯಾಗಿದೆ. ನೂರಕ್ಕೂ ಹೆಚ್ಚು ವಚನ ಸಾಹಿತ್ಯ, ಅನುವಾದ ಕೃತಿಗಳು ಮತ್ತು ವಿಮರ್ಶಾ ಕೃತಿಗಳನ್ನು ರಚಿಸಿದ್ದಾರೆ. ಪ್ರೊ.ಎಲ್.ಎಸ್.ಎಸ್. ಪ್ರಶಸ್ತಿಯು ಪ್ರೊ. ಓ.ಎಲ್.ಎನ್‌ರವರಿಗೆ ಸಂದಿರುವುದು ಅತ್ಯಂತ ಸಮಂಜಸ ಆಯ್ಕೆಯಾಗಿದೆ. ಶ್ರೀ ಡಿ.ವಿ.ರಾಜಶೇಖರ್‌ರವರು ಪ್ರಜಾವಾಣಿ ಸೇರಿದಂತೆ ಅನೇಕ ಪತ್ರಿಕೆಗಳಲ್ಲಿ ವರದಿಗಾರರಾಗಿ, ಅಂಕಣಕಾರರಾಗಿ, ಸುದ್ದಿ ಸಂಪಾದಕರಾಗಿ ಅತ್ಯಂತ ದಕ್ಷತೆಯಿಂದ ಮತ್ತು ಪ್ರಾಮಾಣಿಕತೆಯಿಂದ ಕೆಲಸ ನಿರ್ವಹಿಸಿ ಹಿರಿಯರು ಹಾಗೂ ಕಿರಿಯರಿಂದ ಮೆಚ್ಚುಗೆಯನ್ನು ಪಡೆದಿದ್ದಾರೆ. ಈ ಪ್ರಶಸ್ತಿಗಳ ಆಯ್ಕೆ ಸಮಿತಿಯಲ್ಲಿ ಪಾರದರ್ಶಕವಾಗಿ ಕೆಲಸ ನಿರ್ವಹಿಸಿದ ಡಾ. ಎಚ್.ದಂಡಪ್ಪ ಮತ್ತು ಶ್ರೀ ಬಿ.ಎಂ. ಹನೀಫ್‌ರವರು ಸಾಹಿತ್ಯ ವಿಮರ್ಶಕರಾಗಿ ಮತ್ತು ಪತ್ರಕರ್ತರಾಗಿ ಎಲ್ಲರಿಗೂ ಚಿರಪರಿಚಿತರು ಇವರಿಬ್ಬರೂ ಇಂದು ಪ್ರಶಸ್ತಿ ವಿಜೇತರಿಗೆ ಅಭಿನಂದನಾ ನುಡಿಗಳನ್ನು ಸಮರ್ಪಿಸಲಿದ್ದಾರೆ ಎಂದರು.

೨ನೇ ಪುಟಕ್ಕೆ

**ಸಂಪಾದಕೀಯ**

ಭಾರತದಲ್ಲಿ ಕೊರೋನಾ ಕಂಟಕ ಪ್ರಾರಂಭಗೊಂಡು ಒಂದು ವರ್ಷ ಕಳೆದಿದೆ. ಈ ಒಂದು ವರ್ಷದಲ್ಲಿ ಅಸಂಖ್ಯಾತ ಜನರು ಸಂಕಷ್ಟಗಳಿಗೆ ಒಳಗಾಗಿದ್ದಾರೆ. ಜನರ ಬಡತನ ಹೆಚ್ಚಾಗಿದೆ. ನಿರುದ್ಯೋಗ ಹೆಚ್ಚಾಗಿದೆ. ಎಲ್ಲ ವರ್ಗದ ಜನರೂ ಆರ್ಥಿಕ ಹಿನ್ನಡೆಯ ಝಳವನ್ನು ಅನುಭವಿಸುತ್ತಿದ್ದಾರೆ.

ಹೀಗಿರುವಾಗ ಹೋದೆಯಾ ಪಿಶಾಚಿ ಎಂದರೆ ಬಂದೇ ಗವಾಕ್ಷಿಯಲ್ಲಿ ಎನ್ನುವಂತೆ ಕೊರೋನಾ ವೈರಾಣುವಿನಿಂದ ಮುಕ್ತಗೊಳ್ಳುತ್ತಿದ್ದೇವೆ ಎಂದು ಸಮಾಧಾನದ ಉಸಿರು ಬಿಡುವಷ್ಟರಲ್ಲಿ ಎರಡನೇ ಅಲೆ ಪ್ರಾರಂಭಗೊಂಡಿದೆ. ಈ ಎರಡನೇ ಅಲೆ ಇನ್ನೆಷ್ಟು ಅನಾಹುತಗಳನ್ನು ತಂದೊಡ್ಡುತ್ತದೆಯೋ ಎಂಬ ಆತಂಕ ಉಂಟಾಗಿದೆ.

**ಬರಲಿರುವ ಶ್ರೀ ಪ್ಲವ ನಾಮ ಸಂವತ್ಸರದಲ್ಲಿ ಈ ಎಲ್ಲ ಕಷ್ಟಕೋಟಲೆಗಳು ಕೊನೆಗೊಳ್ಳುತ್ತವೆ ಎಂದು ಆಶಿಸೋಣ.**

**– ಬಿ.ಆರ್. ರವೀಂದ್ರನಾಥ**

## ಏಪ್ರಿಲ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಶಾಂತರಸ | ೦೪-೦೪-೧೯೨೯ |
| ಫರ್ಡಿನಾಂಡ್ ಕಿಟೆಲ್ | ೦೮-೦೪-೧೮೩೨ |
| ಆರ್. ನರಸಿಂಹಚಾರ್ | ೦೯-೦೪-೧೮೬೧ |
| ಆನಂದಕಂದ ಬೇಟಗೇರಿ ಕೃಷ್ಣಶರ್ಮಾ | ೧೬-೦೪-೧೯೦೦ |
| ತರಾಸು | ೨೧-೦೪-೧೯೨೦ |
| ಬೀಚಿ | ೨೩-೦೪-೧೯೧೩ |
| ಪಿಕ್ರಿನ್ | ೨೨-೦೪-೧೮೪೯ |
| ತಿರುಮಲೆ ತಾತಾಚಾರ್ಯ ಶರ್ಮಾ | ೨೭-೦೪-೧೯೮೫ |

## ಏಪ್ರಿಲ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಭಾರತಿಸುತ | ೦೪-೦೪-೧೯೭೬ |
| ತರಾಸು | ೧೦-೦೪-೧೯೮೪ |
| ಎಂ.ಎಸ್. ಪುಟ್ಟಣ್ಣ | ೧೧-೦೪-೧೯೩೦ |
| ಗಳಗನಾಥರು | ೨೨-೦೪-೧೯೪೨ |
| ವಿಕೃ ಗೋಕಾಕ್ | ೨೮-೦೪-೧೯೯೨ |
| ಶಾಂತಿನಾಥ ದೇಸಾಯಿ | ೨೬-೦೩-೧೯೮೮ |

೧ನೇ ಪುಟದಿಂದ

ಹಿರಿಯ ಸಾಹಿತಿ ಹಾಗೂ ರಾಜ್ಯ ಸಭಾ ಉಪಸಭಾಪತಿಯವರಾದ ಡಾ. ಎಲ್. ಹನುಂತಯ್ಯನವರು ಪ್ರಶಸ್ತಿಗಳನ್ನು ಪ್ರದಾನ ಮಾಡಿದ ನಂತರ, ಪ್ರೊ. ಎಲ್.ಎಸ್. ಎಸ್.ರವರ ಸಣ್ಣಕತೆಗಳ ಸಂಕಲನವನ್ನು ನಾಡೋಜ ಪ್ರೊ. ಎಂ.ಎಚ್. ಕೃಷಯ್ಯನವರು ಲೋಕಾರ್ಪಣೆಗೊಳಿಸಿದರು. ಈ ಸಮಾರಂಭದಲ್ಲಿ ಉಪಸ್ಥಿತರಿದ್ದ ಪ್ರೊ. ಎಲ್.ಎಸ್. ಎಸ್.ರವರ ಧರ್ಮಪತ್ನಿ ಹಾಗೂ ಪ್ರೊ. ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ ದತ್ತಿ ಸ್ಥಾಪಕರಾದ ಶ್ರೀಮತಿ ಭಾರತಿರಾವ್ ಮತ್ತು ಶ್ರೀ ವಿ. ನಾಗರಾಜರಾವ್ ಅವರ ಪುತ್ರಿ ಹಾಗೂ ಶ್ರೀ ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ ದತ್ತಿ ಸ್ಥಾಪಕರಾದ ಶ್ರೀಮತಿ ರಾಜೇಶ್ವರಿ ಕೃಷ್ಣ ಅವರನ್ನು ವೇದಿಕೆಗೆ ಆಹ್ವಾನಿಸಿ ಅಭಿನಂದಿಸಲಾಯಿತು.

ಅಧ್ಯಕ್ಷೀಯ ಭಾಷಣ ಮಾಡಿದ ಡಾ. ಎಲ್. ಹನುಮಂತಯ್ಯನವರು, 'ಕನ್ನಡದಲ್ಲಿ ಇಂದು ವಿಮರ್ಶೆಗಳು ತುಂಬಾ ಕ್ಷೀಣಿಸಿವೆ. ವಿಮರ್ಶೆ ಲೇಖಕನನ್ನು ಕೈಹಿಡಿದು ನಡೆಸುವ ದೀವಿಗೆ. ಇಂದು ಕಣ್ಮುಚ್ಚಿ ಕುಳಿತಿದೆ ಎಂಬ ಸಂಗತಿ ಬಹಳ ಕಾಡುತ್ತಿದೆ ಎಂದು ಹೇಳಿದರು. ಇಂದಿನ ವಿಮರ್ಶಾಲೋಕದ ಆಗು ಹೋಗುಗಳ ಬಗ್ಗೆ ಬೇಸರ ವ್ಯಕ್ತಪಡಿಸಿದರು.

ಎಚ್.ದಂಡಪ್ಪನವರು ಮಾತನಾಡುತ್ತ, ಭಾರತೀಯ ಕಾವ್ಯಮೀಮಾಂಸೆಯ ಬಗೆಗಿನ ಎಲ್ಲಾ ಅಧ್ಯಯನಗಳನ್ನು ಕನ್ನಡದ ಸಂದರ್ಭಕ್ಕೆ ಅನ್ವಯಿಸಿ 'ವಿಮರ್ಶೆಯ ಪರಿಭಾಷೆ' ಎಂಬ ಅಪರೂಪದ ಕೃತಿಯನ್ನು ನಮಗೆ ಕೊಟ್ಟಿದ್ದಾರೆ. 'ಸಿಂಗರ್‌ನ ಕತೆಗಳು' ಅನುವಾದಿತ ಕೃತಿಯಾದರೂ ನಮ್ಮ ಕನ್ನಡದ ಕೃತಿಯಂತೆಯೇ ಓದಿಸಿಕೊಂಡು ಹೋಗುತ್ತದೆ. ಪಾಶ್ಚಾತ್ಯ ಕಾವ್ಯ ಮೀಮಾಂಸೆ, ಸಂಸ್ಕೃತ ಕಾವ್ಯ ಮೀಮಾಂಸೆ, ಭಾರತೀಯ ಮತ್ತು ಕನ್ನಡ ಮೀಮಾಂಸೆಗಳನ್ನು ಒಟ್ಟಾರೆಯಾಗಿ ತುಲನಾತ್ಮಕ ಅಧ್ಯಯನ ಮಾಡಿದ್ದಾರೆ. ವಿಶ್ವಮಾನವತೆಯ ಕಡೆಗೆ ನಮ್ಮನ್ನು ಸೆಳೆಯುತ್ತಾರೆ ಎಂದು ಪ್ರೊ. ಓ.ಎಲ್.ಎನ್. ರವರ ಬಗ್ಗ ಹೇಳಿದರು.

ಬಿ.ಎಂ. ಹನೀಫ್‌ರವರು ಡಿ.ವಿ. ರಾಜಶೇಖರ್‌ರ ಬಗ್ಗೆ ಮಾತನಾಡುತ್ತ ಅವರ ಶಿಸ್ತು, ಬದ್ಧತೆ ಹಾಗೂ ಪರಿಶ್ರಮ ಇಂದಿನ ಪತ್ರಕರ್ತರಲ್ಲಿ ಕಾಣುತ್ತಿಲ್ಲ. ನಾನೂ ಸಹ ಅವರೊಂದಿಗೆ ಕೆಲಸ ಮಾಡಿದ್ದೇನೆ. ಅನೇಕ ಅಂಶಗಳನ್ನು ಅವರಿಂದ ಗ್ರಹಿಸಿದ್ದೇನೆ ಎಂದರು.

ಪ್ರಶಸ್ತಿಯನ್ನು ಸ್ವೀಕರಿಸಿ ಕೃತಜ್ಞತಾ ನುಡಿಗಳನ್ನಾಡಿದ ಪ್ರೊ. ಓ.ಎಲ್.ನಾಗಭೂಷಣ ಸ್ವಾಮಿರವರು ವಿಮರ್ಶೆ ಎನ್ನುವ ಸಾಹಿತ್ಯ ಪ್ರಕಾರ ಕಣ್ಮರೆ–ಯಾಗುತ್ತಿದೆ. ರಾಷ್ಟ್ರ ಧೋರಣೆ ಹೊಂದಿರುವ ರಾಷ್ಟ್ರದಲ್ಲಿ ವಿಮರ್ಶಕರನ್ನೂ ರಾಷ್ಟ್ರದ್ರೋಹಿಗಳೆಂದು ಪರಿಗಣಿಸುವ ಆತಂಕ ಎದುರಾಗಿದೆ ಎಂದರು. ಜಾಗತಿಕ ಮಟ್ಟದಲ್ಲಿ ಆಗುತ್ತಿರುವ ರಾಜಕೀಯ ಬದಲಾವಣೆಗಳು ಆಯಾ ದೇಶಗಳ ಸಾಹಿತ್ಯವನ್ನೂ ಸಹ ರೂಪಿಸಬಲ್ಲವಾಗಿವೆ. ಇಂದು ವಿಶ್ವ ತಾಯಿ ನುಡಿ ದಿವಸ. ನಮ್ಮ ನಮ್ಮ ಮಾತೃಭಾಷೆಯನ್ನು ಉಳಿಸಿಕೊಳ್ಳುವ ಪ್ರಯತ್ನವಾಗಬೇಕು. ಎಲ್.ಎಸ್.ಎಸ್ ಅವರ ಹೆಸರಿನಲ್ಲಿರುವ ಈ ಪ್ರಶಸ್ತಿಯನ್ನು ಸ್ವೀಕರಿಸಲು ನನಗೆ ಬಹಳ ಸಂತೋಷವಾಗಿದೆ ಎಂದರು. ಡಾ. ಎಲ್. ಹನುಮಂತಯ್ಯನವರು ನನ್ನ ಹಳೆಯ ಗೆಳೆಯರು ಅವರು ರಾಜ್ಯ ಸಭಾ ಉಪಸಭಾಪತಿಯ ಹಂತಕ್ಕೆ ಏರಿರುವುದು ನಮಗೆಲ್ಲರಿಗೂ ಹೆಮ್ಮೆಯ ಸಂಗತಿಯಾಗಿದೆ ಎಂದರು. ವಿಮರ್ಶೆ ಮಾಡುವುದಕ್ಕೆ ತಾಳ್ಮೆ ಬೇಕು. ಸ್ವೀಕರಿಸುವುದಕ್ಕೂ ಸಹನೆ ಬೇಕು ಎಂದರು.

ಡಿ.ವಿ. ರಾಜಶೇಖರ್‌ರವರು ಮಾತನಾಡಿ ನಾವು ಕೆಲಸ ಮಾಡುತ್ತಿದ್ದ ಹಿಂದಿನ ಕಾಲಘಟ್ಟದಲ್ಲಿ ಹಣಕ್ಕೆ ಪ್ರಾಧಾನ್ಯತೆ ಇರಲಿಲ್ಲ. ಗುಣ ಹಾಗೂ ಗುಣಮಟ್ಟದ ಬಗ್ಗೆ ಮೊದಲ ಆದ್ಯತೆಯನ್ನು ಕೊಡುತ್ತಿದ್ದೆವು. ಇಂದು ರೋಚಕ ವಸ್ತುಗಳಿಗೆ ಆದ್ಯತೆ ನೀಡಲಾಗುತ್ತಿದೆ. ರಾಜಕೀಯ ವಿಷಯಗಳು ಮೇಲುಗೈ ಪಡೆಯುತ್ತಿವೆ. ಅಭಿವ್ಯಕ್ತಿ ಸ್ವಾತಂತ್ರ್ಯದ ದುರುಪಯೋಗ ಆಗುತ್ತದೆ. ವಸ್ತು ನಿಷ್ಠ ಮತ್ತು ಮೌಲ್ಯಾಧಾರಿತ ಬದುಕನ್ನು ನಾವು ರೂಪಿಸಿಕೊಳ್ಳಬೇಕು ಎಂದರು. ಎಲ್.ಎಸ್.ಎಸ್‌ರವರ ಕಥಾಸಂಕಲನವನ್ನು ಬಿಡುಗಡೆ ಮಾಡಿದ ನಾಡೋಜ ಪ್ರೊ. ಎಂ.ಹೆಚ್. ಕೃಷ್ಣಯ್ಯನವರು, ಎಲ್.ಎಸ್.ಎಸ್.ರವರಿಗೆ ಬದುಕಿನ ಒಳನೋಟಗಳನ್ನು ಗ್ರಹಿಸುವ ಶಕ್ತಿಯಿತ್ತು. ಅಮೂರ್ತವೆನಿಸುವ ವಿಷಯಗಳನ್ನು ಮೂರ್ತರೂಪಕ್ಕಿಳಿಸಿ ಕತೆಗಳನ್ನಾಗಿಸಿದರು. ಅವರೂ ಕೂಡಾ ಒಬ್ಬ ಕತೆಗಾರರೆಂದು ಓದುಗರು ಸ್ವೀಕರಿಸಬೇಕೆಂದರು.

ಡಾ.ಬಿ.ಸಿ.ರಾಜಕುಮಾರ್‌ರವರು ಕಾರ್ಯಕ್ರಮದ ನಿರೂಪಣೆ ಮಾಡಿದರು. ಡಾ. ಎಸ್. ಅನಿಲ್ ಕುಮಾರ್ ರವರು ಎಲ್ಲರನ್ನೂ ವಂದಿಸಿದರು.

# ಏಪ್ರಿಲ್ ೨೦೨೧ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**ಮೂರು ದಿನಗಳ ಅನುವಾದ ಕಮ್ಮಟ** (ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಹಯೋಗದೊಂದಿಗೆ)

ದಿನಾಂಕ : ೨-೪-೨೦೨೧: ಶುಕ್ರವಾರ ಬೆಳಿಗ್ಗೆ ೧೧-೦೦ ಗಂಟೆಗೆ

**ಕಮ್ಮಟದ ಉದ್ಘಾಟನೆ: ಡಾ. ಅಜ್ಜಕ್ಕಳ ಗಿರೀಶ್ ಭಟ್**

ಅಧ್ಯಕ್ಷರು, ಕುವೆಂಪು ಭಾಷಾಭಾರತಿ ಪ್ರಾಧಿಕಾರ, ಬೆಂಗಳೂರು

**ದಿನಾಂಕ : ೪-೪-೨೦೨೧: ಭಾನುವಾರ ಸಂಜೆ ೪-೩೦**

**ಅನುವಾದ ಕಮ್ಮಟದ ಮುಕ್ತಾಯ ಸಮಾರಂಭ**

**ಮುಖ್ಯ ಅತಿಥಿಗಳು: ಶ್ರೀ ಟಿ. ಎಸ್. ನಾಗಾಭರಣ**

ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ

ದಿನಾಂಕ : ೧೫-೪-೨೦೨೧ ಗುರುವಾರ ಸಂಜೆ : ೪:೩೦

ಜಾಲಗೋಷ್ಠಿ: ಗೂಗಲ್ ಮೀಟ್

ಶ್ರೀಮತಿ ರುಕ್ಮಿಣಮ್ಮ ಸೀತಾರಾಮರಾವ್ ದತ್ತಿ ಕಾರ್ಯಕ್ರಮ

**ಮರೆಯಬಾರದ ಶ್ರೇಷ್ಠ ಸಾಹಿತಿಗಳು ಮಾಲಿಕೆ**

**ವಿಷಯ: ಮಧುರ ಚೆನ್ನ : ವ್ಯಕ್ತಿ ಮತ್ತು ಸಾಹಿತ್ಯ**

**ಉಪನ್ಯಾಸಕರು: ಡಾ. ಬೈರಮಂಗಲ ರಾಮೇಗೌಡ**

ನಿವೃತ್ತ ಪ್ರಾಧ್ಯಾಪಕರು ಮತ್ತು ಖ್ಯಾತ ಲೇಖಕರು

**ದಿನಾಂಕ : ೨೦-೪-೨೦೨೧: ಮಂಗಳವಾರ ಸಂಜೆ : ೪:೩೦**

**ಜಾಲಗೋಷ್ಠಿ: ಗೂಗಲ್ ಮೀಟ್**

ಶ್ರೀ ಸಿ.ಕೆ.ನಾಗರಾಜರಾವ್, ಶ್ರೀ ಕೆ.ಪಿ.ರಾವ್, ಶ್ರೀ ಕೊರಟಿಶ್ರೀನಿವಾಸರಾವ್ದತ್ತಿ

**ಮರೆಯಬಾರದ ಶ್ರೇಷ್ಠ ಸಾಹಿತಿಗಳು ಮಾಲಿಕೆ**

**ವಿಷಯ: ಬಿ. ಪುಟ್ಟಸ್ವಾಮಯ್ಯ: ವ್ಯಕ್ತಿ ಮತ್ತು ಸಾಹಿತ್ಯ**

**ಉಪನ್ಯಾಸಕರು : ಪ್ರೊ. ಕೃಷ್ಣಮೂರ್ತಿ ಹನೂರ**

ನಿವೃತ್ತ ಪ್ರಾಧ್ಯಾಪಕರು ಮತ್ತು ಖ್ಯಾತ ಲೇಖಕರು

೧೬-೩-೨೦೨೧

**ಪಂಡಿತ್ ಓ.ಆರ್. ರಾಮಣ್ಣ ಮತ್ತು ಶ್ರೀಮತಿ ಪುಟ್ಟಮ್ಮ ದತ್ತಿ ಉಪನ್ಯಾಸ**

**ದತ್ತಿ ಸ್ಥಾಪಕರು : ಡಾ.ಆರ್. ಲಕ್ಷ್ಮೀನಾರಾಯಣ**

**ವಿಷಯ : ಜೈಮಿನಿ ಭಾರತ-ಸುಧನ್ವನ ಧರ್ಮ ಸಂಕಟ ಪ್ರಸಂಗ**

**ಉಪನ್ಯಾಸ : ಡಾ.ಎನ್.ಆರ್. ಲಲಿತಾಂಬ,**

ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರ.ದ. ಕಾಲೇಜು ವಿಜಯನಗರ

ಈ ದತ್ತಿ ಉಪನ್ಯಾಸವನ್ನು ಹೆಸರಾಂತ ಸಾಹಿತಿ ಡಾ. ಎನ್.ಆರ್. ಲಲಿತಾಂಬರವರು "ಜೈಮಿನಿ ಭಾರತ-ಸುಧನ್ವನ ಧರ್ಮ ಸಂಕಟ ಪ್ರಸಂಗ" ಎಂಬ ವಿಷಯದ ಬಗ್ಗೆ ಜಾಲಗೋಷ್ಠಿ ಉಪನ್ಯಾಸವನ್ನು ಆಸಕ್ತಿಕರವಾಗಿ ಮಂಡಿಸಿದರು. ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಆರ್.ಲಕ್ಷ್ಮೀನಾರಾಯಣರವರು ತಮ್ಮ ತಂದೆತಾಯಿಗಳ ನೆನಪಿನಲ್ಲಿ ಸ್ಥಾಪಿಸಿರುವ ಈ ದತ್ತಿಯು ಕನ್ನಡದ ಷಟ್ಪದಿ ಕಾವ್ಯಗಳನ್ನು ಕುರಿತಂತೆ ವಿದ್ವಾಂಸರಿಂದ ಉಪನ್ಯಾಸವನ್ನು ಏರ್ಪಡಿಸುವ ಆಶಯವನ್ನು ಹೊಂದಿದೆ. ಓ.ಆರ್. ರಾಮಣ್ಣನವರು ತುಮಕೂರಿನ ಸರ್ಕಾರಿ ಪ್ರೌಢಶಾಲೆಯೂ ಸೇರಿದಂತೆ ವಿವಿಧ ಪ್ರೌಢ ಶಾಲೆಗಳಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. ಅವರಿಗೆ ಕುಮಾರವ್ಯಾಸ ಭಾರತ, ಹರಿಶ್ಚಂದ್ರ ಕಾವ್ಯ, ಜೈಮಿನಿ ಭಾರತ ಮೊದಲಾದ ಷಟ್ಪದಿ ಕಾವ್ಯಗಳು ವಾಚೋವಿಧೇಯವಾಗಿದ್ದವು. ಇವುಗಳ ಗಮಕ ವ್ಯಾಖ್ಯಾನಕಾರರಾಗಿಯೂ ಬಹುವರ್ಷ ಕೆಲಸ ಮಾಡಿದರು.

ಡಾ.ಎನ್.ಲಲಿತಾಂಬರವರು ೧೫ ಲೇಖನಗಳು, ೫ ಕಥೆಗಳು, ೩೦ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ಹಾಗೂ ಇತರ ಕೃತಿಗಳನ್ನು ರಚಿಸಿದ್ದಾರೆ. ರಾಜ್ಯ ಹಾಗೂ ರಾಷ್ಟ್ರ ಮಟ್ಟದ ವಿಚಾರ ಸಂಕಿರಣಗಳು, ಸಮ್ಮೇಳನಗಳು, ಕಮ್ಮಟಗಳು, ಗೋಷ್ಠಿಗಳಲ್ಲಿ, ಅಧ್ಯಾಪಕರ ಪುನರ್ಮನನ ಶಿಬಿರಗಳಲ್ಲಿ, ಸಂಶೋಧನಾ ವಿದ್ಯಾರ್ಥಿಗಳ ಕಮ್ಮಟಗಳಲ್ಲಿ ಸಂಪನ್ಮೂಲವ್ಯಕ್ತಿಯಾಗಿ ಭಾಗವಹಿಸಿದ್ದಾರೆ.

ಲಕ್ಷ್ಮೀಶ ಯಾಕೆ ನಮ್ಮ ಕನ್ನಡಗರಿಗೆ ಅಚ್ಚುಮೆಚ್ಚಿನ ಕವಿಯಾದ ಎಂದರೆ ಅದಕ್ಕೆ ಕಾರಣ ಅವನು ಕಾವ್ಯದಲ್ಲಿ ಭಕ್ತಿರಸವನ್ನು ತುಂಬಿ ಜನಸಾಮಾನ್ಯರಿಗೆ ಅರ್ಥವಾಗುವಂತೆ ಕಾವ್ಯರಚನೆಯನ್ನು ಮಾಡಿದ್ದು ಜೈಮಿನಿ ಭಾರತವು ಇಂದಿಗೂ ಪ್ರಸ್ತುತವಾಗಿದೆ. ಧರ್ಮರಾಯನ ಅಶ್ವಮೇಧಯಾಗದ ಹಿನ್ನೆಲೆ ಸಂದರ್ಭವನ್ನು ಹೊಂದಿರುವ, ಮನೋಹರ ಶೈಲಿಯಲ್ಲಿರುವ ಈ ಕಾವ್ಯಭಾಗದಲ್ಲಿನ ಗೇಯತೆ ಎಲ್ಲರಿಗೂ ಪ್ರಿಯವಾಗುತ್ತದೆ. ಕಥಾನಾಯಕ ಅರ್ಜುನನಾದರೂ, ಕೃಷ್ಣನ ಭಕ್ತಿ ಪ್ರೇಮವು ಕೇಂದ್ರಬಿಂದುವಾಗುತ್ತದೆ. ಇದರಲ್ಲಿ ೩೪ ಸಂಧಿಗಳು ಹಾಗೂ ೧೯೦೭ ವಾರ್ಧಕ ಷಟ್ಪದಿಗಳಿವೆ.

೭ನೇ ಪುಟಕ್ಕೆ

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

## ೨೭-೨-೨೦೨೧

### ಬೇಟೆರಾಯ ದೀಕ್ಷಿತ ದತ್ತಿ ಉಪನ್ಯಾಸ

ಉಪನ್ಯಾಸಕರು : ಪ್ರೊ. ಎಸ್. ಜಿ. ಸಿದ್ಧರಾಮಯ್ಯ

ವಿಷಯ : ಗಂಗಾಧರ ಚಿತ್ತಾಲರು : ವ್ಯಕ್ತಿ ಮತ್ತು ಕಾವ್ಯ




ಶ್ರೀ ಬೇಟೆರಾಯ ದೀಕ್ಷಿತ್, ಪ್ರೊ. ಬಿ.ರಾಮಸ್ವಾಮಿ, ಶ್ರೀಮತಿ ಎಚ್.ವಿ.ಸಾವಿತ್ರಮ್ಮ ರಾಮಸ್ವಾಮಿ ಮತ್ತು ಶ್ರೀ ಎಸ್. ಶ್ರೀಕಂಠಯ್ಯನವರ ನೆನಪಿನ ದತ್ತಿ ಕಾರ್ಯಕ್ರಮವನ್ನು ಪ್ರಸಿದ್ಧ ಕವಿಗಳಾದ ಪ್ರೊ. ಎಸ್. ಜಿ. ಸಿದ್ಧರಾಮಯ್ಯನವರು "ಗಂಗಾಧರ ಚಿತ್ತಾಲರು : ವ್ಯಕ್ತಿ ಮತ್ತು ಕಾವ್ಯ" ಎಂಬ ಉಪನ್ಯಾಸವನ್ನು "ಮರೆಯಬಾರದ ಶ್ರೇಷ್ಠ ಸಾಹಿತಿಗಳು" ಮಾಲಿಕೆಯಲ್ಲಿ ನೀಡುವುದರ ಮೂಲಕ ನೆರವೇರಿಸಿದರು. ಆರಂಭದಲ್ಲಿ ಡಾ. ಆರ್. ಲಕ್ಷ್ಮೀನಾರಾಯಣರವರು ಶ್ರೀ ಬೇಟೆರಾಯ ದೀಕ್ಷಿತರು ಗ್ರಾಮದ ಜೋಡಿದಾರರಾಗಿದ್ದುಕೊಂಡು ಅಪರೂಪದ ಸಾಹಿತ್ಯ ರಚನೆ ಕೀರ್ತನೆಗಳ ರಚನೆ ಮಾಡಿದ್ದಾರೆ. ಶಾಕುಂತಲ ನಾಟಕದ ಕನ್ನಡಾನುವಾದ ಮಾಡಿದ್ದಾರೆ. ದೇವರ ನಾಮ ಮತ್ತು ಕೀರ್ತನೆಗಳ ರಚನೆ ಮಾಡಿದ್ದಾರೆ. ಶ್ರೀಕಂಠಯ್ಯನವರಿಗೆ 'ಐತಿಹಾಸಿಕ ರತ್ನ' ಎಂಬ ಬಿರುದಿದೆ ಎಂದು ಹೇಳಿದರು. ಪ್ರೊ. ಸಿದ್ಧರಾಮಯ್ಯನವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ಮಾಡಿದ ಕನ್ನಡದ ಸೇವೆಯನ್ನು ಶ್ಲಾಘಿಸಿದರು. ಡಾ.ಬಿ.ಸಿ.ರಾಜಕುಮಾರ್‌ರವರು ಕಾರ್ಯಕ್ರಮದ ಸಂಯೋಜನೆಯನ್ನು ಮಾಡಿದರು.

ಪ್ರೊ. ಸಿದ್ಧರಾಮಯ್ಯನವರು ಮಾತನಾಡುತ್ತ, ಯಶವಂತ ಚಿತ್ತಾಲರ ಅಣ್ಣನವರಾದ ಗಂಗಾಧರ ಚಿತ್ತಾಲರು ದೊಡ್ಡ ಕವಿಗಳಾಗಿದ್ದರೂ ಸಹ ಹೆಚ್ಚು ಪ್ರಚಲಿತರಾಗಲಿಲ್ಲ. ಅವರು 'ಕಾಲದ ಕರೆ', 'ಮನುಕುಲದ ಹಾಡು',, 'ಹರಿವ ನೀರಿದು', 'ಸಂಪರ್ಕ' ಎಂಬ ಕವನ ಸಂಕಲನಗಳನ್ನು ಪ್ರಕಟಿಸಿದ್ದರು. ಎಲೆ ಮರೆಯ ಕಾಯಿಯ ಹಾಗೆ ಸಾಹಿತ್ಯ ರಚನೆ ಮಾಡಿ ಯಾವ ಪಂಥಕ್ಕೂ ಸೇರದವರಾಗಿದ್ದರು. ನವೋದಯದ ಅಂತ್ಯದಲ್ಲಿ ಆರಂಭಗೊಂಡು ನವ್ಯದಾದ್ಯಂತ ಬರೆದವರು. ಸುದೀರ್ಘವಾದ ೪೫ವರ್ಷಗಳ ಸಮಯದಲ್ಲಿ ಬರೆದದ್ದು ಕೆಲವೇ ಕೃತಿಗಳಾದರೂ ಅವೆಲ್ಲವೂ ಅರ್ಥಪೂರ್ಣವಾದ ಕೃತಿಗಳು ಎಂದರು. ಇವುಗಳು ಚಿಂತನಶೀಲ ಕ್ರಿಯೆಯ ಹಾಗೂ ಸೃಜನಶೀಲ ಕ್ರಿಯೆಯ ಅತ್ಯುತ್ತಮ ಉದಾಹರಣೆಗಳು ಎಂದು ತಿಳಿಸಿದರು. ಅವರ ಸ್ವಾನುಭಾವಾಧಾರಿತ ಜೀವನ ಮೀಮಾಂಸೆಯನ್ನು ಅವರ ಕೃತಿಗಳಲ್ಲಿನ ಕಾವ್ಯ ಮೀಮಾಂಸೆಯಲ್ಲಿ ಕಾಣಬಹುದು ಎಂದರು. ಅವರ ಕಾವ್ಯಗಳು ತೀವ್ರ ಸಂವೇದನೆಯ ಫಲ ಸ್ವರೂಪವಾಗಿವೆ ಎಂದು ಹೇಳುತ್ತ 'ಬೆಳಗು' ಪದ್ಯದಲ್ಲಿ ಬದುಕಿನ ನಾನಾ ಆಯಾಮಗಳನ್ನು ಮತ್ತು 'ದುಃಖ ಗೀತೆ' ಕೃತಿಯಲ್ಲಿನ ಸಾವು, ನೋವಿನ ಸತತ ಕಾಡುವಿಕೆಯ ಆರ್ದ್ರದನಿಯ ಬಗ್ಗೆ ವಿವರಿಸಿದರು. ದುಃಖ ಗೀತೆಗಳು ಒಂದು ಅನನ್ಯ ಕೃತಿಯಾಗಿದ್ದು ಇದನ್ನು ಇಂಗ್ಲೀಷಿನ ಇಟುರಂಥಿ ಗೀತಗಳೊಂದಿಗೆ ಹೋಲಿಸಲಾಗಿದೆ ಎಂದರು. ಅವರು ಕಾವ್ಯರಚನೆಯನ್ನು ಒತ್ತಡದಲ್ಲಿ ಮಾಡಲಿಲ್ಲ. ಬದುಕಿಗೆ ಸ್ಪಂದನವಾಗಿ ಕಾವ್ಯರಚನೆಯನ್ನು ಮಾಡಿದ್ದಾರೆ. ಬದುಕಿನ ಒಳಹೊರಗನ್ನು ಅಂತಃ ಚಕ್ಷುವಿನಿಂದ ಕಂಡಿದ್ದಾರೆ. ಭಾಷೆಯ ಅನನ್ಯತೆಯನ್ನು ದಕ್ಕಿಸಿಕೊಂಡು ಭಾವಕ್ಕೆ ತಕ್ಕ ಮಾತಿನೊಂದಿಗೆ, ನಿಷ್ಠೆಯಿಂದ ಕಾವ್ಯ ರಚನೆಯನ್ನು ಮಾಡಿದ್ದಾರೆ. ಅವರು ಕಂಡ ಆಪ್ತರ ಅನೇಕ 'ಸಾವು'ಗಳು ಅವರ ಕಾವ್ಯದ ಕೇಂದ್ರ ಪ್ರಜ್ಞೆಯಾಗಿದೆ. ಅವರ ಊರಾದ ಆನೆ ಹಳ್ಳಿಯ ಬದುಕಿನ ಅನನ್ಯ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ. ಚರಿತ್ರೆಯೆಂದು ಹಾಡಿದ ಗೀತ ಆತ್ಮಗೀತವಾದದ್ದು ವ್ಯಕ್ತಿಗತವಾದದ್ದು ದುರಂತವೇ ಸರಿ. ಕೊನೆಗೆ ಅವರ ಬದುಕೂ ಸಹ ದುರಂತದಲ್ಲಿ ಕೊನೆಗೊಂಡಿತು. ಅವರ ಇನ್ನೊಂದು ಸುಂದರ ಕಾವ್ಯವೆಂದರೆ 'ಕಾಮಸೂತ್ರ'. ಇದರಲ್ಲಿ ಅಶ್ಲೀಲವಲ್ಲದ ಗಂಡು ಹೆಣ್ಣಿನ ಕಾಮಸ್ವರೂಪದ ಸಂಬಂಧವನ್ನು ಶುದ್ಧ ಭಾಷೆಯಲ್ಲಿ ಕಟ್ಟಿ-ಕೊಟ್ಟಿದ್ದಾರೆ ಎಂದು ವರ್ಣಿಸಿದರು. ಡಾ.ಬಿ.ಸಿ.ರಾಜಕುಮಾರ್‌ರವರು ಉಪನ್ಯಾಸಕಾರರನ್ನು ಮತ್ತಿತರರನ್ನು ಹೃತ್ಪೂರ್ವಕವಾಗಿ ವಂದಿಸಿದರು.

## ೨೮-೨-೨೦೨೧

### ಡಾ. ಮೋಹನ್‌ದೇವ್ ಆಳ್ವ- ಡಾ. ಶೈಲಜಾ ಆಳ್ವ ದತ್ತಿ- ಕರ್ನಾಟಕ ಮತ್ತು ಶಾಸ್ತ್ರೀಯ ಸಂಗೀತ ಸ್ಪರ್ಧೆ

ಈ ಬಾರಿ ಕರ್ನಾಟಕ ಹಾಗೂ ಹಿಂದೂಸ್ತಾನಿ ಸಂಗೀತ ಸ್ಪರ್ಧೆಗಳೆರಡನ್ನೂ ಏಕಕಾಲಕ್ಕೆ ನಡೆಸಲಾಯಿತು. ಒಟ್ಟಾರೆಯಾಗಿ ೬೨ ಯುವ ಗಾಯಕರು ಅತ್ಯಂತ ಸ್ಪರ್ಧಾತ್ಮಕವಾಗಿ ಭಾಗವಹಿಸಿ ತಮ್ಮ ಪ್ರತಿಭೆಗಳ ಸಾಮರ್ಥ್ಯ ಪ್ರದರ್ಶನವನ್ನು ನೀಡಿದರು. ಕರ್ನಾಟಕ ಸಂಗೀತ ಸ್ಪರ್ಧೆಯ ಕಿರಿಯರ ವಿಭಾಗದಲ್ಲಿ ೩೦ ಮಂದಿ, ಹಿರಿಯರ ವಿಭಾಗದಲ್ಲಿ ೨೦ ಮಂದಿ, ಹಿಂದೂಸ್ತಾನಿ ಕಿರಿಯರ ವಿಭಾಗದಲ್ಲಿ ೧೦ ಮಂದಿ, ಹಿರಿಯರ ವಿಭಾಗದಲ್ಲಿ ಇಬ್ಬರು ಸ್ಪರ್ಧಿಗಳು ಭಾಗವಹಿಸಿದರು. ಕರ್ನಾಟಕ ಸಂಗೀತ ವಿಭಾಗದಲ್ಲಿ ವಿದುಷಿ ಶ್ರೀಮತಿ ನವ್ಯ ನಾಗರಾಜ್ ಮತ್ತು ಶ್ರೀಮತಿ ವಿದುಷಿ ಹರ್ಷಿಣಿಯವರು ನಿರ್ಣಾಯಕರಾಗಿ ಕಾರ್ಯ ನಿರ್ವಹಿಸಿದರು. ಹಿಂದೂಸ್ತಾನೀ ವಿಭಾಗದಲ್ಲಿ ವಿದುಷಿ ಎಚ್. ಕೆ. ನಿರ್ಮಲಾ ಮತ್ತು ವಿದುಷಿ ಶ್ರೀಮತಿ ಜ್ಯೋತಿ ಶಶಿಧರ್‌ರವರು ಬಹುಮಾನಗಳ ನಿಷ್ಕರ್ಷೆಯನ್ನು ಮಾಡಿದರು. ದಿನವಿಡೀ ನಡೆದ ಆಹ್ಲಾದಕರ ಕಾರ್ಯಕ್ರಮವು ಕೇಳುಗರಿಗೆ ರಸಾನುಭವವನ್ನು ನೀಡಿತು. ಒಟ್ಟಾರೆಯಾಗಿ, ಎಲ್ಲರೂ ಸಂಗೀತಮಯ ವಾತಾವರಣದಲ್ಲಿ ದಿನವನ್ನು ಕಳೆದರು.

ಕಾರ್ಯಕ್ರಮದ ಕೊನೆಯಲ್ಲಿ ಡಾ. ಮೋಹನ್‌ದೇವ ಆಳ್ವರವರು ಮಾತನಾಡಿ ತಮ್ಮ ತಂದೆಯವರಾದ ದಿ| ಡಾ. ನಾಗಪ್ಪ ಆಳ್ವರವರ ಕಾಲದಿಂದಲೂ ನಾಡಿನ ಹೆಸರಾಂತ ಸಂಗೀತಗಾರರ ಜೊತೆಗಿನ ತಮ್ಮ ನಂಟನ್ನು ವಿವರಿಸಿ ಹೇಳಿದರು. ಈ ನಾಡಿನಲ್ಲಿ ಅನೇಕಾನೇಕ ಮೇರು ಪ್ರತಿಭೆಗಳು ಅರಳಿ ಎತ್ತರಕ್ಕೆ ಬೆಳೆದು ನಾಡಿಗೆ ಹೆಸರನ್ನು ತಂದಿದ್ದಾರೆ. ಅವರ ತಲೆಮಾರಿನ ಸಾಧನೆಗಳನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯುವ ಜವಾಬ್ದಾರಿ ಯುವಜನಾಂಗದ ಮೇಲಿದೆ.

ನಾಡಿನ ಸಂಪ್ರದಾಯ ಮತ್ತು ಸಾಂಸ್ಕೃತಿಕ ಪರಂಪರೆಯನ್ನು



ಉಳಿಸಿಬೆಳೆಸುವ ಕಾರ್ಯವನ್ನು ಎಲ್ಲರೂ ಮಾಡಬೇಕೆಂದರು. ಪ್ರಸ್ತುತ ಸ್ಪರ್ಧೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ ಮಕ್ಕಳಿಗೆ ಶುಭ ಹಾರೈಸಿದರು. ಮಕ್ಕಳಿಗೆ ಉತ್ತೇಜನ ನೀಡುತ್ತಿರುವ ಪೋಷಕರಿಗೆ ಅಭಿನಂದನೆಗಳನ್ನು ತಿಳಿಸಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್. ಲಕ್ಷ್ಮೀನಾರಾಯಣರವರು ಮಾತನಾಡಿ, ಡಾ. ಮೋಹನ್‌ದೇವ ಆಳ್ವರವರು ಒಟ್ಟು ಐದು ಲಕ್ಷ ರೂಪಾಯಿಗಳ ಷುದುವಟ್ಟನ್ನು ಪ್ರತಿಷ್ಠಾನದಲ್ಲಿ ಇಟ್ಟಿದ್ದಾರೆ. ಈ ಬಾರಿಯ ಅತಿರಿಕ್ತ ಖರ್ಚಿನ ಮೊತ್ತವನ್ನೂ ಸಹ ಉದಾರ ಮನಸ್ಸಿನಿಂದ ಭರಿಸಿದ್ದಾರೆ. ಅವರಿಗೆ ಪ್ರತಿಷ್ಠಾನವು ಆಭಾರಿಯಾಗಿದೆ ಎಂದರು.

ಸ್ಪರ್ಧೆಗಳಲ್ಲಿ ಕೆಲವರಿಗೆ ಮಾತ್ರ ಬಹುಮಾನ ದೊರೆಯುತ್ತದೆ. ಉಳಿದವರು ನಿರಾಶರಾಗದೆ ತಮ್ಮ ಕೌಶಲ್ಯವನ್ನು ಹೆಚ್ಚಿಸಿಕೊಂಡು ಮುಂದಿನ ಸ್ಪರ್ಧೆಗಳಲ್ಲಿ ಭಾಗವಹಿಸಿ ಎಂಬ ಹಿತೋಪದೇಶವನ್ನು ಕಾರ್ಯಕ್ರಮದ ನಿರ್ವಾಹಕರಾದ ಡಾ. ಹೆಚ್.ಎಸ್.ಎಂ. ಪ್ರಕಾಶ್‌ರವರು ನೀಡಿದರು. ಎಲ್ಲರನ್ನೂ ವಂದಿಸುತ್ತ, ಡಾ. ಬಿ.ಸಿ. ರಾಜಕುಮಾರ್ ಅವರು, ಸಾಹಿತ್ಯ ಮತ್ತು ಸಂಗೀತ ಒಂದೇ ನಾಣ್ಯದ ಎರಡು ಮುಖಗಳಿದ್ದ ಹಾಗೆ. ಗಾಯಕರು ಎರಡರಲ್ಲಿಯೂ ಪರಿಣಿತಿಯನ್ನು ಹೊಂದಿರಬೇಕು ಎಂದು ಬುದ್ಧಿವಾದ ಹೇಳಿದರು.

## ಬಹುಮಾನ ವಿಜೇತರ ವಿವರಗಳು

### ಕರ್ನಾಟಕ ಶಾಸ್ತ್ರೀಯ ಸಂಗೀತ (ಕಿರಿಯರು)

೧. ಪ್ರಥಮ ಬಹುಮಾನ– ಶ್ರೇಯಸ್ ಕುಮಾರ್
೨. ದ್ವಿತೀಯ ಬಹುಮಾನ – ಶ್ರೀ ಹರ್ಷ
೩. ತೃತೀಯ ಬಹುಮಾನ – ನಿಧಿ ಶೆಣ್ಯೈ
೪. ಸಮಾಧಾನಕರ ಬಹುಮಾನ – ಶ್ರೀಮಯಿ

### ಕರ್ನಾಟಕ ಶಾಸ್ತ್ರೀಯ ಸಂಗೀತ (ಹಿರಿಯರು)

೧. ಪ್ರಥಮ ಬಹುಮಾನ– ಆರ್. ವಾಣಿಶ್ರೀ
೨. ದ್ವಿತೀಯ ಬಹುಮಾನ – ಕೌಸ್ತುಭ
೩. ತೃತೀಯ ಬಹುಮಾನ – ಹೇಮಂತ ಆಚಾರ್

### ಹಿಂದೂಸ್ತಾನಿ ಸಂಗೀತ (ಕಿರಿಯರು)

೧. ಪ್ರಥಮ ಬಹುಮಾನ– ಶ್ರೇಯಾ ವಿ.ಮೂರ್ತಿ
೨. ದ್ವಿತೀಯ ಬಹುಮಾನ – ನಿಶಿತಾ ಪ್ರಸಾದ್
೩. ತೃತೀಯ ಬಹುಮಾನ – ಸಿಂಚನ ಎಸ್. ಶಂಕರ್
೪. ಸಮಾಧಾನಕರ ಬಹುಮಾನ– ವೈಷ್ಣವಿ ವಿ.ಬಿ.

### ಹಿಂದೂಸ್ತಾನಿ ಸಂಗೀತ (ಹಿರಿಯರು)

ಬಹುಮಾನ –ಗೋವಿಂದ ಕೆ.

## ೦೩–೦೩–೨೦೨೧
## 'ಶ್ರೀಮತಿ ಬಿ.ಜಿ.ಕುಸುಮಾ ಸಾಮಾಜಿಕ ಸೇವಾ ಟ್ರಸ್ಟ್' ದತ್ತಿ ಸರ್.ಸಿ.ವಿ. ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ

'ಶ್ರೀಮತಿ ಬಿ.ಜಿ.ಕುಸುಮಾ ಸಾಮಾಜಿಕ ಸೇವಾ ಟ್ರಸ್ಟ್' ನ ವತಿಯಿಂದ ಪ್ರಾಯೋಜಿತವಾದ ಜಾಲಗೋಷ್ಠಿ ಕಾರ್ಯಕ್ರಮವನ್ನು ೦೩–೦೩–೨೦೨೧ರಂದು ನಡೆಸಿಕೊಡಲಾಯಿತು. ಮೊದಲಿಗೆ ಡಾ. ಲಕ್ಷ್ಮೀನಾರಾಯಣ ಅವರು ಉಪನ್ಯಾಸಕರು ಹಾಗೂ ದತ್ತಿ ಸ್ಥಾಪಕರ ಪರಿಚಯವನ್ನು ಮಾಡಿದರು. ಡಾ. ಚನ್ನೇಶ್‌ರವರು ಮಣ್ಣಿನ ವಿಜ್ಞಾನದಲ್ಲಿ ಪಿಎಚ್.ಡಿ. ಪದವಿ ಪಡೆದಿದ್ದಾರೆ. ವಿಜ್ಞಾನ ಸಂವಹನಕಾರರಾಗಿ ಹೆಸರು ಪಡೆದಿದ್ದಾರೆ. ನೂರಾರು ಲೇಖನಗಳು ಹಾಗು ಪುಸ್ತಕಗಳನ್ನು ಬರೆದಿದ್ದಾರೆ. ಆಕಾಶವಾಣಿಯ ಮೂಲಕ ಉಪನ್ಯಾಸಗಳನ್ನು ನೀಡಿದ್ದಾರೆ. ಹಲವಾರು ಸಂಸ್ಥೆಗಳಲ್ಲಿ ಕೆಲಸ ಮಾಡಿದ ಅನುಭವವನ್ನು ಪಡೆದಿದ್ದಾರೆ.

ಶ್ರೀಮತಿ ಕುಸುಮಾರವರು ಆಚಾರ್ಯಪಾಠಶಾಲಾ ಕಾಲೇಜಿನ ವಿಜ್ಞಾನ ಶಿಕ್ಷಕಿಯಾಗಿ ಸಾವಿರಾರು ವಿದ್ಯಾರ್ಥಿಗಳಿಗೆ ಸ್ಫೂರ್ತಿಯ ಸೆಲೆಯಾಗಿ ಜೀವನವನ್ನು ವಿಜ್ಞಾನಕ್ಕಾಗಿ ಮುಡಿಪಾಗಿಟ್ಟವರು. ಡಾ.ಬಿ.ಸಿ.ರಾಜಕುಮಾರ್‌ರವರು ಕಾರ್ಯಕ್ರಮದ ಸಂಯೋಜನೆಯನ್ನು ಮಾಡಿದರು.

ವಿಜ್ಞಾನಿಗಳಾದ ಡಾ. ಚನ್ನೇಶ್‌ರವರು "ವಿಜ್ಞಾನದ ಅನುಸಂಧಾನದಲ್ಲಿ ಆನಂದ ಮತ್ತು ಬೆರಗು" ಎಂಬ ವಿಷಯದ ಬಗ್ಗೆ ಆಸಕ್ತಿದಾಯಕವಾಗಿ ಉಪನ್ಯಾಸವನ್ನು ನೀಡಿದರು. ವಿಜ್ಞಾನದ ನಾನಾ ಶಾಖೆಗಳಲ್ಲಿ ಕೆಲಸ ಮಾಡುವಾಗ ತೋರುವ ಆನಂದ, ಹರ್ಷ ಹಾಗೂ ಸೋಜಿಗಗಳ ಬಗೆಗೆ




ವಿವರಗಳನ್ನು ನೀಡಿದರು.

'ಅನುಸಂಧಾನ' ಎಂದರೇನು ಎನ್ನುವ ಪ್ರಶ್ನೆಗೆ, ಕಾವ್ಯಾನುಸಂಧಾನ, ಕಲಾನುಸಂಧಾನಗಳ ತುಲನೆಯಲ್ಲಿ ವಿವರಿಸುತ್ತಾ, ರಸಾನುಭವ, ಆನಂದಗಳು ವಿಜ್ಞಾನದಲ್ಲಿಯೂ ಕಾಣಬರುವ ಅಂಶಗಳು ಎಂದು ಉತ್ತರ ನೀಡಿ ಅನೇಕ ವಿಜ್ಞಾನ ಸಂದರ್ಭಗಳ ಉದಾಹರಣೆಗಳನ್ನು ನೀಡಿದರು.

ಸಾಹಿತ್ಯ, ಸಂಗೀತ ಮತ್ತು ಕಲೆಯ ಅನುಸಂಧಾನವು ಹೇಗೆ ಆನಂದವನ್ನು ನೀಡುತ್ತವೆಯೋ ಹಾಗೆಯೇ ವಿಜ್ಞಾನವೂ ಸಹ ತನ್ನ ಅನುಸಂಧಾನ ಕಾರ್ಯದಲ್ಲಿ ತೊಡಗಿದವರಿಗೆ ಆನಂದವನ್ನು ನೀಡಬಲ್ಲದು. ವಿಜ್ಞಾನದ ಲಾಭಗಳನ್ನು ಹೊರತು ಪಡಿಸಿ ಮಾತನಾಡುವುದಾದರೆ, "ಸತ್ಯ ಮತ್ತು ಸೌಂದರ್ಯ"ವನ್ನು ಪರಿಗಣಿಸಿದರೆ ಮತ್ತು ನಿಸರ್ಗದ ನಿಗೂಢಗಳನ್ನು ಬೇಧಿಸುವ ವಿಜ್ಞಾನದ ಜಿಜ್ಞಾಸೆಗಳ ಮೂಲಕ ಕಂಡು–ಕೊಂಡ ಸತ್ಯಗಳು ಮನಸ್ಸಿಗೆ ಹರ್ಷವನ್ನು ನೀಡಬಲ್ಲವು ಎಂದರು.

೭ನೇ ಪುಟಕ್ಕೆ

೧೩–೩–೨೦೨೧

## ಶ್ರೀಮತಿ ರಂಗನಾಯಕಮ್ಮ ಶ್ರೀ ಜಿ.ಸುಬ್ಬರಾವ್ ದತ್ತಿ ಕಾರ್ಯಕ್ರಮ

**ಸ್ಥಾಪಕರು : ಶ್ರೀಮತಿ ಸುನಂದಾ ಶಿವಶಂಕರ್**

**ಸಂಗೀತಕಾರ್ಯಕ್ರಮ**

ಈ ಸಂಗೀತ ಕಾರ್ಯಕ್ರಮವನ್ನು ಯುವ ಪ್ರತಿಭೆಯಾದ ಶ್ರೀಮತಿ ಜೆ.ಕೆ. ಯೋಗ ಕೀರ್ತನರವರು ಅತ್ಯಂತ ಮನಮೋಹಕವಾಗಿ ನಡೆಸಿಕೊಟ್ಟರು. ಕರ್ನಾಟಕ ಶಾಸ್ತ್ರೀಯ ಸಂಗೀತಪ್ರಿಯ ಸಾಂಸ್ಕೃತಿಕ ಹಿನ್ನೆಲೆಯ ಕುಟುಂಬದಿಂದ ಪ್ರೇರಿತರಾದ ಶ್ರೀಮತಿ ಯೋಗ ಕೀರ್ತನರವರು ಕಿರಿಯ ಮತ್ತು ಹಿರಿಯ ಸಂಗೀತ ಪರೀಕ್ಷೆಯನ್ನು ಉನ್ನತ ಶ್ರೇಣಿಯಲ್ಲಿ ಪಾಸು ಮಾಡಿದ್ದಾರೆ. ವಿವಿಧ ಸಂಗೀತೋತ್ಸವಗಳಲ್ಲಿ ಹಾಡಿ ಹೆಸರು ಮಾಡಿದ್ದಾರೆ. ಅನೇಕ ಸ್ಪರ್ಧೆಗಳಲ್ಲಿ ಬಹುಮಾನಗಳನ್ನು ಗಳಿಸಿದ್ದಾರೆ. ಆಕಾಶವಾಣಿ 'ಬಿ'ಗ್ರೇಡ್ ಆರ್ಟಿಸ್ಟ್ ಆಗಿರುವ ಇವರು ಎಂ.ಎಸ್. ಸುಬ್ಬುಲಕ್ಷ್ಮಿ ಫೆಲೋಷಿಪ್ ಇನ್ ಮ್ಯೂಸಿಕ್ ಹಾಗೂ ತಂಬೂರ ಪ್ರಶಸ್ತಿಗಳನ್ನು ಗಳಿಸಿಕೊಂಡಿದ್ದಾರೆ. ಅನೇಕ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಅನುಭವವನ್ನು ಪಡೆದಿರುವ ಇವರು, ಅಂದಿನ ಕಾರ್ಯಕ್ರಮದ ಆರಂಭದಲ್ಲಿ ಷಣ್ಮುಖಪ್ರಿಯ ರಾಗದಲ್ಲಿ ಊತಕಾಡು ವೆಂಕಟಕವಿ ವಿರಚಿತ ಶ್ರೀ ಗಣೇಶ್ವರ ಕೃತಿಯನ್ನು ಹಾಡಿ ಕಾರ್ಯಕ್ರಮಕ್ಕೆ ಮುನ್ನುಡಿಯನ್ನು ಬರೆದರು. ಪಕ್ಕವಾದ್ಯದಲ್ಲಿ ಮತ್ತೂರು ವಿಶ್ವಜಿತ್‌ರವರು ಮೃದಂಗವನ್ನು ಮತ್ತು ಪುತ್ತೂರು ನಿಕ್ಷಿತ್‌ರವರು ಪಿಟೀಲನ್ನು ನುಡಿಸಿ ಕಾರ್ಯಕ್ರಮಕ್ಕೆ ವಿಶೇಷ ಮೆರುಗನ್ನು ನೀಡಿದರು. ನಂತರದಲ್ಲಿ ಶ್ರೀಮತಿಯೋಗ ಕೀರ್ತನರವರು ತ್ಯಾಗರಾಜರ ಚಾಲ ಕಲ್ಲಲಾಡು ಚಿನ್ನ ಎಂಬ ಕೃತಿಯನ್ನು ರಾಗ ಆರಭಿಯಲ್ಲಿ ಹಾಡಿದರು. ತದನಂತರದಲ್ಲಿ, ದೀಕ್ಷಿತರ ಚಿಂತಯಾಮ ಕೃತಿಯನ್ನು ಭೈರವಿರಾಗದಲ್ಲಿ, ಸ್ವಾತಿ ತಿರುನಾಳ್‌ರ ಭೋಗೀಂದ್ರ ಶಯನಮ್ ಕೃತಿಯನ್ನು ಕುಂತಲವರಾಹಿ ರಾಗದಲ್ಲಿ, ತ್ಯಾಗರಾಜರ ಮೋಹನ ರಾಮ ಕೃತಿಯನ್ನು ಮೋಹನ ರಾಗದಲ್ಲಿಯೂ ಮನಮೋಹಕವಾಗಿ ಹಾಡಿ ಸಭಿಕರನ್ನು ರಂಜಿಸಿದರು. ಕೊನೆಯಲ್ಲಿ ಪುರಂದರ ದಾಸರ ಜಗದೋದ್ಧಾರನ ಆಡಿಸಿದಳು ಯಶೋಧೆ ಕೃತಿಯನ್ನು ಕಾಪಿ ರಾಗದಲ್ಲಿ ಸುಂದರವಾಗಿ ಹಾಡಿದರು. ಕಾರ್ಯಕ್ರಮದ ಫೇಸ್‌ಬುಕ್ ಸಂಯೋಜನೆಯನ್ನೂ ಸಹ ಮಾಡಿದ ಡಾ. ಬಿ.ಸಿ. ರಾಜಕುಮಾರ್‌ರವರು ಕಾರ್ಯಕ್ರಮವನ್ನು ನಿರ್ವಹಿಸಿದರು.



೧೪–೩–೨೦೨೧

## ದಿ. ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ದತ್ತಿ

ಸ್ಥಾಪಕರು : ಶ್ರೀಮತಿ ಬಿ.ಜಿ. ಕುಸುಮಾ ಮತ್ತು ಕುಟುಂಬದವರು

**ವಿಷಯ : ಕುಮಾರವ್ಯಾಸ ಭಾರತದ 'ಭೀಮ ಹಿಡಿಂಬಿ ಪರಿಣಯ'**

**ಗಮಕ : ಶ್ರೀಮತಿ ಶೋಭಾ ಶಶಿಧರ್**

**ವಾಚನ : ಶ್ರೀಮತಿ ಐ.ವಿ. ಗಾಯತ್ರಿ**

ತಮ್ಮ ತಂದೆತಾಯಿಗಳ ನೆನಪಿನಲ್ಲಿ ಶ್ರೀಮತಿ ಬಿ.ಜಿ. ಕುಸುಮಾರವರಿಂದ ಸ್ಥಾಪಿಸಲಾಗಿರುವ ಈ ದತ್ತಿ ಕಾರ್ಯಕ್ರಮವು ಕುಮಾರವ್ಯಾಸ ಭಾರತದ 'ಭೀಮ ಹಿಡಿಂಬಿ ಪರಿಣಯ'ದ ಭಾಗವನ್ನು ಗಮಕಿ ಶ್ರೀಮತಿ ಶೋಭಾಶಶಿಧರ್‌ರವರು ಸೊಗಸಾಗಿ ವಾಚಿಸಿದರು. ವಾಚನದ ಮೇಲಿನ ವ್ಯಾಖ್ಯಾನವನ್ನು ಅಷ್ಟೇ ಸೊಗಸಾಗಿ ಜೊತೆಗೆ ಹಾಸ್ಯಮಯವಾಗಿ ಶ್ರೀಮತಿ ಗಾಯತ್ರಿ ಅವರು ನಡೆಸಿಕೊಟ್ಟರು. 'ಭೀಮ ಹಿಡಿಂಬಿ' ಪ್ರಕರಣದ ಹಿನ್ನೆಲೆಯನ್ನು ಹೇಳಿ ಅಂದರೆ ಲಾಕ್ಷಗೃಹದಿಂದ ತಪ್ಪಿಸಿಕೊಂಡು ಅಲೆದಾಡುತ್ತಿದ್ದ ಪಾಂಡವರು ವಿರಮಿಸುತ್ತಿದ್ದಾಗ, ಮಾನವರ ವಾಸನೆಯನ್ನು ಗ್ರಹಿಸಿ ಅಲ್ಲಿಗೆ ಬಂದ ಹಿಡಂಬನನ್ನು ಭೀಮನು ಸಂಹರಿಸುತ್ತಾನೆ. ನಂತರದಲ್ಲಿ ಅವನ ತಂಗಿಯಾದ ಹಿಡಿಂಬೆಯು ಅವನ ಮೇಲೆ ಕೋಪಗೊಂಡಿದ್ದರೂ ಸಹ ಅವನ ರೂಪಕ್ಕೆ ಮನಸೋತು ಅವನನ್ನು ವರಿಸುತ್ತಾಳೆ. ನಂತರದಲ್ಲಿ ಘಟೋತ್ಕಚನ ಜನನವಾಗುತ್ತದೆ. ಈ ಸಂದರ್ಭದ ಸೊಗಸಾದ ವ್ಯಾಖ್ಯಾನ–ವಾಚನವನ್ನು ನೀಡುತ್ತಾ ಅಲ್ಲಿನ ಹಾಸ್ಯಮಯ ಕ್ಷಣಗಳನ್ನು ವಿವರಿಸಿದಾಗ ಕೇಳುಗರು ನಕ್ಕುನಲಿದರು. ಮಾನವ–ದಾನವರ ಮುಖಾಮುಖಿಯ ಈ ಸಂದರ್ಭವನ್ನು ಅತ್ಯಂತ ಆಸಕ್ತಿದಾಯಕವಾಗಿ ಮಂಡಿಸಿದರು. ಕೊನೆಯಲ್ಲಿ ಡಾ. ಹೆಚ್.ಎಸ್.ಎಂ. ಪ್ರಕಾಶ್‌ರವರು ಎಲ್ಲರನ್ನೂ ವಂದಿಸುತ್ತ, ಮಾನವ ಪ್ರಭೇದಗಳು ಕವಲಾದ ಸಂದರ್ಭವಿದು ಎಂದು ತಿಳಿಸಿದರು. ಗಮಕ ವಿದ್ವಾಂಸೆಯಾದ ಶ್ರೀಮತಿ ಗಂಗಮ್ಮ ಕೇಶವಮೂರ್ತಿಯವರು ಸಮಾರಂಭದಲ್ಲಿ ಉಪಸ್ಥಿತರಿದ್ದರು.



## ಶ್ರದ್ಧಾಂಜಲಿ



**ಡಾ.ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ**

೨೯–೧೦–೧೯೩೬ – ೮ –೩–೨೦೨೧

ಭಾವಗೀತೆ, ಸಾಹಿತ್ಯ ವಿಮರ್ಶೆ, ಅನುವಾದ, ನವ್ಯ ಕವಿತೆ, ಮಕ್ಕಳಿಗಾಗಿ ಗೀತೆಗಳ ರಚನೆ ಮುಂತಾದ ಹಲವಾರು ಪ್ರಕಾರಗಳಲ್ಲಿ ಕೃಷಿ ಮಾಡಿದ್ದ ಡಾ.ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ ಅವರು ೦೮–೦೩–೨೦೨೧ರಂದು ವಿಧಿವಶರಾದರು.

ದಿವಂಗತರಿಗೆ **ಬಿಎಂಶ್ರೀ ಪ್ರತಿಷ್ಠಾನವು ಶ್ರದ್ಧಾಂಜಲಿ ಅರ್ಪಿಸುತ್ತದೆ.**




# ಪತ್ರಿಕಾ ನೆನಪು





ರಾಜ್ಯಸಭಾ ಸದಸ್ಯ ಎಲ್.ಹನುಮಂತಯ್ಯ ಕಳವಳ

'ಕನ್ನಡದಲ್ಲಿ ಕ್ಷೀಣಿಸಿದ ವಿಮರ್ಶೆಗಳು'

ಅನುವಾದ ಕಮ್ಮ

ಬೆಂಗಳೂರು: ಕನ್ನಡ ಕಾಯಕ ವರ್ಷ ಅಂಗವಾಗಿ ಕನ್ನಡ ಅಭಿವೃದ್ಧಿ ಪ್ರಾಧಿ ಹಾಗೂ ಬಿ.ಎಂ.ಶ್ರೀ. ಪ್ರತಿಷ್ಠಾನದ ವತಿಯಿಂದ ಏ. 2 ರಿಂದ 4ರವರೆಗೆ ಅನುವಾದ ಕಮ್ಮಟ ಏರ್ಪಡಿಸಲಾಗಿ

ಅಭ್ಯರ್ಥಿಗಳು ಕನಿಷ್ಠ ಪದವಿ ವಿದ್ಯಾರ್ಹತೆ ಹಾಗೂ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪ್ರೌಢಿಮೆ ಹೊಂದಿರಬೇಕು. ಶಿಬಿರದಲ್ಲಿ 30 ಮಂದಿಗಷ್ಟೇ ಅವಕಾಶವಿದೆ.

ಆಸಕ್ತರು ಇದೇ 22ರೊಳಗೆ ಶಿಬಿರದ ನಿರ್ದೇಶಕರಾದ ಎಂ.ಅಬ್ದು ರೆಹಮಾನ್ ಪಾಷ ಅವರ ಬಳಿ ಹೆಸ ನೋಂದಾಯಿಸಿಕೊಳ್ಳಬಹುದು.


ಹಳೆಯ ಘಟನೆಗಳನ್ನು ನೆನಪಿಸಿಕೊಂಡ ಒಡನಾಡಿಗಳು

'ಭಟ್ಟರಿಂದ ಭಾವಗೀತೆಯ ಆಯಾಮ ವಿಸ್ತಾರ'

---

೫ ನೇ ಪುಟದಿಂದ

ತಮ್ಮ ಬಾಲ್ಯದ ಅನುಭವಗಳನ್ನು ವಿವರಿಸುತ್ತ ಕರ್ಣಕುಂಡಲ, ಸೂರ್ಯಕ್ರಾಂತಿ, ಮುಟ್ಟಿದರೆ ಮುನಿ ಗಿಡಗಳನ್ನು ನೋಡಿ ಅವುಗಳ ವಿಶಿಷ್ಟ ಕಾರ್ಯವೈಖರಿಗಳನ್ನು ನೋಡಿ ಆಶ್ಚರ್ಯ ಪಟ್ಟು, ಆನಂದಿತರಾಗಿ ಬೆರಗುಗೊಂಡಿದ್ದೆವು ಎಂದು ಹೇಳಿದರು. ವಸ್ತುಗಳ ಸೌಂದರ್ಯದಲ್ಲಿ ಒಂದು ಸುಂದರ ಸೂತ್ರವಿದೆ. ಆ ಸೂತ್ರದ ಪ್ರಕಾರವಿದ್ದರೆ ಅದು ಸುಂದರವಾಗಿ ಕಾಣುತ್ತದೆ.

ಸೌಂದರ್ಯ ಮತ್ತು ಸತ್ಯ ಜೊತೆಜೊತೆಯಲ್ಲಿಯೇ ಸಾಗುತ್ತವೆ. ದಿನನಿತ್ಯದ ಜೀವನದಲ್ಲಿ ವಿಜ್ಞಾನದ ಸತ್ಯಗಳನ್ನು ಸರಳ ರೀತಿಗಳಲ್ಲಿ ಮನಗಾಣಬಹುದು ಎಂದರು. ಭೌತಶಾಸ್ತ್ರದ ತತ್ವಗಳಾದ ಗುರುತ್ವಾಕರ್ಷಣೆ , ಆಯಸ್ಕಾಂತೀಯತೆ, ಬೆಳಕು, ಶಾಖ, ವಿಕಿರಣತೆ, ಸೂರ್ಯ, ಚಂದ್ರ, ನಕ್ಷತ್ರಗಳು, ಉಲ್ಕೆಗಳು ಇತ್ಯಾದಿಗಳನ್ನು ಕಂಡಾಗ ಎಲ್ಲರೂ ಆನಂದ ತುಂದಲಿತರಾಗುತ್ತಾರೆ ಹಾಗೂ ಬೆರಗುಗೊಳ್ಳುತ್ತಾರೆ. ಹಾಗೆಯೇ ರಸಾಯನಶಾಸ್ತ್ರ, ಜೀವ ವಿಜ್ಞಾನ, ಭೂ ವಿಜ್ಞಾನ, ವೈದ್ಯ ವಿಜ್ಞಾನದ ತತ್ವಗಳೂ ಸಹ ಎಲ್ಲರಿಗೂ ಸಂತೋಷವನ್ನು ನೀಡುತ್ತವೆ. ಭೂಕಂಪ, ಜ್ವಾಲಾಮುಖಿ, ಪ್ರವಾಹಗಳ ಬಗ್ಗೆ ಅರಿವು ಮೂಡಿದಾಗ ಮನಸ್ಸಿಗೆ ಆನಂದವುಂಟಾಗುತ್ತದೆಯೆಂದರು. ಪ್ರಕೃತಿಯ ಕಾರ್ಯವಿಧಾನಗಳು, ಪ್ರಕ್ರಿಯೆಗಳು ಸೋಜಿಗವನ್ನುಂಟು ಮಾಡುತ್ತವೆಯೆಂದರು.

ಪ್ರಶ್ನೋತ್ತರದ ನಂತರ ಡಾ. ಹೆಚ್.ಎಸ್.ಎಂ. ಪ್ರಕಾಶ್‌ರವರು ಎಲ್ಲರಿಗೂ ವಂದನೆಗಳನ್ನು ಅರ್ಪಿಸಿದರು. ಈವತ್ತಿನ ಕನ್ನಡ ವಿಜ್ಞಾನ ಸಂವಹನೆಯಲ್ಲಿ ಕೆಲವು ವಿಜ್ಞಾನಿಗಳು, ಲೇಖಕರು ಮತ್ತು ಮಾಧ್ಯಮಗಳು ಕೆಲವು ವಿಷಯಗಳ ಬಗ್ಗೆ ಸರಿಯಾದ ಮಾಹಿತಿಯನ್ನು ನೀಡುತ್ತಿಲ್ಲ. ಜನಸಾಮಾನ್ಯರಿಗೆ ಮಾಹಿತಿಯನ್ನು ಸರಿಯಾದ ರೀತಿಯಲ್ಲಿ ಕೊಡುವ ಕಾರ್ಯ ಆಗಬೇಕೆಂದು ಹೇಳಿದರು.

---

೩ನೇ ಪುಟದಿಂದ

ವ್ಯಾಸನ ಮಾರ್ಗದರ್ಶನದಂತೆ ಧರ್ಮರಾಯನು ಕುರುಕ್ಷೇತ್ರ ಯುದ್ಧದ ಪಾಪವನ್ನು ನೀಗಿಕೊಳ್ಳಲು. ಅಶ್ವಮೇಧ ಯಾಗವನ್ನು ಮಾಡುತ್ತಾನೆ. ಹಂಸ ಧ್ವಜ ಅಪಾರ ಕೃಷ್ಣಭಕ್ತ. ಅರ್ಜುನನು ಕುದುರೆಯನ್ನು ಕಟ್ಟಿಹಾಕಿದರೆ ಕೃಷ್ಣನ ದರ್ಶನವಾಗುತ್ತದೆ ಎಂಬ ನಂಬಿಕೆಯಿಂದ ಅರ್ಜುನನಿಗೆ ಸವಾಲು ಹಾಕುತ್ತಾನೆ. ಅವನಿಗೆ ನಾಲ್ಕು ಗಂಡ ಮಕ್ಕಳಿದ್ದರು. ಅವರಲ್ಲಿ ಸುಧನ್ವನೂ ಒಬ್ಬನು ಅವನು ಹರಿಯ ಪ್ರೀತಿಯ ಆಧಾರದಲ್ಲಿ ಕೃಷ್ಣನನ್ನು ಗೆಲುವ ಹಂಬಲ ತೋರುತ್ತಾನೆ. ರಣರಂಗಕ್ಕೆ ಕಾದಲು ಹೊರಟುನಿಂತಿರುವ ಪತಿ ಸುಧನ್ವನನ್ನು ತಡೆದು ಅವನ ಪತ್ನಿ ಪ್ರಭಾವತಿಯು ತಾನು ಋತುಮತಿಯಾಗಿರುವುದರಿಂದ ವಂಶದ ಮುಂದುವರಿಕೆಗಾಗಿ ತನ್ನನ್ನು ಸೇರಿಯೇ ತೀರಬೇಕೆಂದು ಹಠ ಹಿಡಿದು ಕುಳಿತಾಗ ಸುಧನ್ವನು ವಿಧಿಯಿಲ್ಲದೆ ಕೂಡುತ್ತಾನೆ. ನಂತರ ಪ್ರಭಾವತಿಯು ವೀರತಿಲಕವನ್ನಿಟ್ಟು ಯುದ್ಧಕ್ಕೆ ಕಳಿಸುತ್ತಾಳೆ. ರಣಭೇರಿ ಕೇಳಿಯೂ ರಣಕ್ಕೆ ಹೊರಡದ ತಪ್ಪಿಗಾಗಿ ಪುರೋಹಿತರಾದ ಶಂಖ ಲಿಖಿತರ ತೀರ್ಮಾನದಂತೆ ಹಂಸಧ್ವಜನು ತನ್ನ ಮಗನನ್ನು ಕುದಿಯುವ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸಿದರೂ ಹರಿಭಕ್ತಿಯಿಂದಾಗಿ ಕೂದಲೂ ಕೊಂಕದೆ ಎದ್ದುಬರುತ್ತಾನೆ. ಅದೇ ಎಣ್ಣೆಯ ಕೊಪ್ಪರಿಗೆಗೆ ಶಂಖಲಿಖಿತರನ್ನೂ ಹಾಕಲು ಭಕ್ತ ಸುಧನ್ವನ ಭಕ್ತಿಯ ಮಹಿಮೆಯಿಂದ ಅವರೂ ಬದುಕುತ್ತಾರೆ. ಆಮೇಲೆ ನಡೆದ ಯುದ್ಧದಲ್ಲಿ ಸುಧನ್ವ ಮಡಿಯುತ್ತಾನೆ. ಈ ಪ್ರಸಂಗದಲ್ಲಿ ರಾಜಪ್ರಭುತ್ವ, ಧರ್ಮ ಸೂಕ್ಷ್ಮ, ಭಕ್ತಿ ಮತ್ತು ಹಂಸಧ್ವಜನ ಪುತ್ರಶೋಕದ ಕರುಣವೂ ಸೇರಿದ್ದು ತುಂಬ ಸುಂದರವಾಗಿ ಮೂಡಿಬಂದಿದೆ.



## ೧೮-೦೩-೨೦೨೧ ಜಾಲಗೋಷ್ಠಿ

# ಜಯಲಕ್ಷ್ಮಮ್ಮ ಬಾಪು ರಾಮಣ್ಣ ದತ್ತಿ ಕಾರ್ಯಕ್ರಮ

**ಉಪನ್ಯಾಸಕರು : ಡಾ. ಬಿ.ಎ. ವಿವೇಕರೈ,**

ನಿವೃತ್ತ ಕುಲಪತಿಗಳು, ಹಂಪಿ ಕನ್ನಡ ವಿಶ್ವವಿದ್ಯಾಲಯ

**ವಿಷಯ : ಶಾರ್ಲೆಟ್ ಬ್ರಾಂಟಿಯ ಜೇನ್‌ಏರ್ ಕಾದಂಬರಿಯ ಕನ್ನಡ ರೂಪಾಂತರಗಳು ನೀಳಾದೇವಿಯವರ ಕಾದಂಬರಿ–'ಬೇಡಿ ಬಂದವಳು', ಸಿನಿಮಾ–'ಬೇಡಿ ಬಂದವಳು', ಶ್ಯಾಮಲಾ ಮಾಧವ ಕನ್ನಡ ಅನುವಾದ–ಜೇನ್ ಏರ್**

ಐವತ್ತು ವರ್ಷಗಳಿಂದಲೂ ತುಳು, ಕನ್ನಡ ಸಾಹಿತ್ಯಗಳೆರಡರಲ್ಲಿಯೂ ಕೃಷಿ ಮಾಡುತ್ತಿರುವ ಡಾ. ವಿವೇಕ ರೈರವರು ಪ್ರಮುಖ ಇಂಗ್ಲೀಷ್ ಅನುವಾದಕರೂ ಆಗಿದ್ದಾರೆ. ಅವರನ್ನು ಈ ಕಾರ್ಯಕ್ರಮಕ್ಕೆ ಆತ್ಮೀಯವಾಗಿ ಡಾ.ಆರ್. ಲಕ್ಷ್ಮೀನಾರಾಯಣ ಸ್ವಾಗತಿಸಿದರು. ಈ ಕಾದಂಬರಿಯು ಭಾರತದ ೧೩ ಭಾಷೆಗಳಿಗೆ ಅನುವಾದವಾಗಿದೆ. ಶಾರ್ಲೆಟ್ ಬ್ರಾಂಟಿ (೧೮೧೬) ಡಾಂಟೆಯ ಪುತ್ರಿ ಗವರ್ನೆಸ್ ಆಗಿ ಕೆಲ ಮಾಡಿ, ಹೆಣ್ಣು ಮಕ್ಕಳಿಗೆ ಪಾಠ ಹೇಳುತ್ತಾಳೆ. ಅವಳ ಕಾದಂಬರಿಯಲ್ಲಿ ಅನೇಕ ನೈತಿಕ ಮತ್ತು ಸಾಮಾಜಿಕ ಅಂಶಗಳನ್ನು ಮೇಲೆತ್ತಿದ್ದಾರೆ. ಈ ಅಂಶಗಳನ್ನು ನೀಳಾದೇವಿಯವರು ಕನ್ನಡದ ವಾತಾವರಣದ ಮುಖಾಂತರ ಕನ್ನಡದ ಪಾತ್ರಗಳ ಮೂಲಕ 'ಬೇಡಿಬಂದವಳು' ಕಾದಂಬರಿಯಲ್ಲಿ ಅಳವಡಿಸಿಕೊಂಡಿದ್ದಾರೆ. ಹಿಮವತ್ ಗೋಪಾಲಸ್ವಾಮಿ ಪರ್ವತದ ರಮಣೀಯ ದೃಶ್ಯಗಳ ವರ್ಣನೆ ತುಂಬಾ ಸುಂದರವಾಗಿದೆ. ಇದೇ ಹೆಸರಿನ ಸಿನಿಮಾದಲ್ಲಿ ನಟಿಸಿದ ಚಂದ್ರಕಲಾ ಮತ್ತು ಕಲ್ಯಾಣಕುಮಾರ್‌ರವರ ಅದ್ಭುತ ಅಭಿನಯದಿಂದಾಗಿ ಯಶಸ್ವೀ ಚಲನಚಿತ್ರವಾಯಿತು. (ಶ್ರೀನಿವಾಸನ್ ಅದರ ನಿರ್ದೇಶನ ಮಾಡಿದ್ದರು (೧೯೬೮). ಆರ್. ಎನ್. ಜಯಗೋಪಾಲ್ ಸಂಗೀತ ರಚನೆ ಮಾಡಿದ್ದರು. ಅದರ ಎರಡು ಹಾಡುಗಳು ಅತ್ಯಂತ ಜನಾನುರಾಗಿಗಳಾದ ಹಾಡುಗಳು. ಹಿಂದಿಯಲ್ಲಿ 'ಶಮಾ' ಹೆಸರಿನಲ್ಲಿಯೂ ಈ ಚಲನ ಚಿತ್ರ ಬಂದಿತು. ತಮಿಳು, ತೆಲುಗಿನಲ್ಲಿ, ಚಿತ್ರಗಳು ಬಂದವು. ಬಂಗಾಲಿಯಲ್ಲಿ ಮಲೆಯಾಳಯಲ್ಲಿ, ಅಸ್ಸಾಮಿಯಲ್ಲಿಯೂ ಚಲನಚಿತ್ರಗಳು ಬಂದವು. ಶ್ಯಾಮಲಾ ಮಾಧವರವರ "ಜೇನ್ ಏರ್" ಹೆಸರಿನ ಕಾದಂಬರಿಯೂ ತುಂಬಾ ಸೊಗಸಾಗಿ ಬಂದಿದೆ ಈ ಕಾದಂಬರಿಯನ್ನು ಈವತ್ತು ಓದಿದರೂ ಸಹ ಅತ್ಯಂತ ಪ್ರಸ್ತುತವೆನಿಸುತ್ತದೆ. ಏಕೆಂದರೆ ಇದರ ಪಾತ್ರಗಳು ಮತ್ತು ಸನ್ನಿವೇಶಗಳು ಇಂದಿಗೂ ನಮ್ಮ ನಡುವೆ ಇವೆ. ಹೀಗಾಗಿ ಇಂಗ್ಲೀಷ್‌ನ ಒಂದು ಉತ್ಕೃಷ್ಟ ಕಾದಂಬರಿಯನ್ನು ಕನ್ನಡಕ್ಕೆ ತಂದು ಕೊಟ್ಟ ನೀಳಾದೇವಿಯವರಿಗೆ ಮತ್ತು ಶ್ಯಾಮಲಾ ಮಾಧವರವರಿಗೆ ಅಭಿನಂದನೆಗಳು ಸಲ್ಲುತ್ತವೆ ಎಂದರು. ಕೊನೆಯಲ್ಲಿ ಪ್ರಶ್ನೋತ್ತರದ ನಂತರ ಡಾ. ಬಿ.ಸಿ.ರಾಜಕುಮಾರ್ ರವರು ವಂದನಾರ್ಪಣೆ ಮಾಡಿದರು.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2021-2023
dt. 28-12-2020
Office of Posting: Bangalore PSO, Bangalore 560026
Price : Annual Subscription Rs. 20/-
Date of publishing and Posting : 30-3-2021

## ಕಿರುಪರಿಚಯ

### ಶ್ರೀಮತಿ ಶೋಭಾ ಶಶಿಧರ್



೧೯೬೨ರ ಡಿಸೆಂಬರ್ ೧೯ರಂದು ಭದ್ರಾವತಿಯಲ್ಲಿ ಜನನ. ವಿದ್ಯಾರ್ಹತೆ ಬಿ.ಎ. ಬಾಲ್ಯದಿಂದಲೇ ಕರ್ನಾಟಕ ಶಾಸ್ತ್ರೀಯ ಸಂಗೀತದ ಅಭ್ಯಾಸ. ಶ್ರೀ ಪಿ.ಆರ್. ಕೇಶವಮೂರ್ತಿಗಳ ಬಳಿ ಕಲಿಕೆ. ಸೀನಿಯರ್ ಪರೀಕ್ಷೆಯಲ್ಲಿ ಉತ್ತೀರ್ಣ. ಗಮಕ ಕ್ಷೇತ್ರದಲ್ಲಿ ತಾಯಿ ಸುಭದ್ರಾ ಸೋಮಶೇಖರ್‌ರವರೇ ಮೊದಲ ಗುರು.

ಆನಂತರದಲ್ಲಿ ಕನಕ–ಪುರಂದರ ಪ್ರಶಸ್ತಿ ವಿಜೇತ ಗಮಕಿ ಶ್ರೀ ರಾಘವೇಂದ್ರರಾಯರ ಬಳಿ ಗಮಕ ವಾಚನಾಭ್ಯಾಸ. ಗಮಕಿ ಕೇಶವಭಟ್ಟ, ಶ್ರೀ ಶಂಕರನಾರಾಯಣರವರ ಬಳಿಯಲ್ಲೂ ಸಹ ಗಮಕ ಕಲಿಕೆ, ಪ್ರಸ್ತುತ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಮಾಜಿ ಅಧ್ಯಕ್ಷೆ, ಗಮಕ ಕಲಾಶ್ರೀ ಶ್ರೀಮತಿ ಗಂಗಮ್ಮ ಕೇಶವಮೂರ್ತಿಯವರ ಬಳಿ ಗಮಕ ಅಭ್ಯಾಸ. ಕನ್ನಡ ಸಾಹಿತ್ಯ ಪರಿಷತ್ ನಡೆಸುತ್ತಿದ್ದ ಗಮಕ ಪ್ರವೇಶ ಮತ್ತು ಪ್ರೌಢ ಪರೀಕ್ಷೆಗಳಲ್ಲಿ ಉತ್ತೀರ್ಣ. ಕರ್ನಾಟಕ ಗಮಕ ಕಲಾ ಪರಿಷತ್ತು ನಡೆಸುವ ಗಮಕ ಪರೀಕ್ಷೆಗಳಿಗೆ ಬೋಧಕರು ಮತ್ತು ಪರೀಕ್ಷಕರು. 'ಶ್ರೀ ವೀಣಾಪಾಣಿ ಸಂಗೀತಾಲಯ' ಎಂಬ ಸಂಗೀತ ಪಾಠಶಾಲೆಯನ್ನು ಸ್ಥಾಪಿಸಿರುತ್ತಾರೆ.

ಬೆಂಗಳೂರು ಮತ್ತು ಕರ್ನಾಟಕ ರಾಜ್ಯಾಂದ್ಯಂತ ಹಲವು ಗಮಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. ರಾಜ್ಯ ಮಟ್ಟದ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದ್ದಾರೆ. ಹಾಸನದ ಗಮಕ ಹಬ್ಬ, ಬೇಲೂರಿನ ಗಮಕ ಉತ್ಸವ, ಬಿಜಾಪುರದಲ್ಲಿ ಗಮಕ ಸಮ್ಮೇಳನದಲ್ಲಿ ಗಮಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಆಕಾಶವಾಣಿ, ದೂರದರ್ಶನದ ಚಂದನವಾಹಿನಿಯಲ್ಲಿ ಗಮಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಪದ್ಮನಾಭನಗರ ಗಮಕ ಕಲಾಭಿಮಾನಿಗಳ ಒಕ್ಕೂಟ ಮತ್ತು ಲಕ್ಷ್ಮೀಕಾಂತ ದೇವಾಲಯ ಇವರಿಗೆ 'ಗಮಕಕೋವಿದೆ' ಬಿರುದನ್ನು ನೀಡಿದೆ.

ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯು ಗಮಕ ಕ್ಷೇತ್ರದಲ್ಲಿ ಇವರ ಸಾಧನೆಯನ್ನು ಗುರುತಿಸಿ 'ನಮ್ಮ ಸಾಧಕರಿವರು' ಪ್ರಶಸ್ತಿ ನೀಡಿ ಗೌರವಿಸಿದೆ. ಶ್ರೀಮಾತಾ ಮಹಿಳಾಸಂಘ, ಬೆಂಗಳೂರು ಅಂತರಾಷ್ಟ್ರೀಯ ಮಹಿಳಾ ದಿನಾಚರಣೆಯ ಅಂಗವಾಗಿ ಸಾಧಕಿ ಪ್ರಶಸ್ತಿ ನೀಡಿ ಗೌರವಿಸಿದೆ.

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ...............................................................................

...............................................................................

...............................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭